



# ಹೊಂಗನಸು



ಬಿ.ಎಂ.ಶ್ರೀ ಪ್ರತಿಷ್ಠಾನದ ವಾರ್ತಾಪತ್ರ

ಹೊಂಗನಸು – 34


| ಸಂಪುಟ: ೦೪ ಸಂಚಿಕೆ: ೮ | ನವೆಂಬರ್ ೨೦೧೭ | ಪುಟಗಳು ೮ | ವಾರ್ಷಿಕ ಚಂದ ರೂ. ೨೦/– | ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್ |
|---|---|---|---|---|
| Vol. 04 Issue 8 | November 2017 | Pages - 8 | A. Sub. - Rs. 20/- | Editor : Sri. B.R. Ravindranath |





ವಿಳಾಸ
**ಬಿ.ಎಂ.ಶ್ರೀ. ಪ್ರತಿಷ್ಠಾನ**
ಸ್ಥಾಪನೆ : ೦೬–೦೫–೧೯೭೯
ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು – ೧೯
ದೂರವಾಣಿ:೨೬೬೧೫೮೭೭, ೨೬೬೭೬೭೭೩
ಇಮೇಲ್ : bmsritrust@gmail.com
web: www.bmshri.org




**ಬಿ.ಎಂ.ಶ್ರೀ ಪ್ರತಿಷ್ಠಾನದ ಎಲ್ಲಾ ಸದಸ್ಯರೂ ಹಾಗೂ ಅಭಿಮಾನಿಗಳಿಗೆ ಕರ್ನಾಟಕ ರಾಜ್ಯೋತ್ಸವದ ಶುಭಾಶಯಗಳು.**

## ೧೧–೧೦–೨೦೧೭ರಂದು ಹಳಗನ್ನಡ ಡಿಪ್ಲೊಮಾ ತರಗತಿಗಳ ಉದ್ಘಾಟನೆ




ಪ್ರತಿಷ್ಠಾನದ ೩೮ ವರ್ಷಗಳ ದೀರ್ಘ ಇತಿಹಾಸದಲ್ಲಿ, ಈ ದಿನವು ಒಂದು ಮೈಲಿಗಲ್ಲು ಎಂದು ಭಾವಿಸಬಹುದು, ಕಾರಣ ಈವರೆಗೂ ಪ್ರತಿಷ್ಠಾನವು ಸೀಮಿತ ಸಂಖ್ಯೆಯ ವಿದ್ಯಾರ್ಥಿಗಳಿಗೆ ಹಳಗನ್ನಡ ಶಿಬಿರ/ತರಗತಿಗಳನ್ನು ನಡೆಸಿಕೊಂಡು ಬರುತ್ತಿದ್ದು ಇತ್ತೀಚೆಗೆ ವಿದ್ಯಾರ್ಥಿಗಳು, ಅಧ್ಯಾಪಕರು, ಉಪನ್ಯಾಸಕರು, ಪ್ರೌಢಶಾಲಾ ಶಿಕ್ಷಕರೂ ಮತ್ತು ಸ್ವಂತ ಆಸಕ್ತಿ ಮತ್ತು ಹಳಗನ್ನಡ ಕಾವ್ಯಗಳ ಮೇಲಿನ ಪ್ರೀತಿಯಿಂದ ನಿವೃತ್ತಿ ಪಡೆದವರೂ ಮತ್ತು ಗೃಹಿಣಿಯರು, ಇವರೆಲ್ಲರ ಮನವಿಯನ್ನು ಪರಿಗಣಿಸಿ, ಪ್ರತಿಷ್ಠಾನವು ಆರು ತಿಂಗಳ ಅವಧಿಯ ಹಳಗನ್ನಡ ಡಿಪ್ಲೊಮೊ ತರಗತಿಗಳನ್ನು ನಡೆಸಲು ತೀರ್ಮಾನಿಸಿದ ವಿಷಯವನ್ನು ಅಧ್ಯಕ್ಷರಾದ ಡಾ|| ಪಿ.ವಿ.ನಾರಾಯಣ ಅವರು ತಮ್ಮ ಪ್ರಾಸ್ತಾವಿಕ ನುಡಿಗಳಲ್ಲಿ ತಿಳಿಸಿದರು. ಪಠ್ಯಕ್ರಮದಲ್ಲಿನ ವಿವರಗಳನ್ನೂ ಸಹ ಸಭೆಗೆ ತಿಳಿಸಿದರು. ತರಗತಿಗಳ ಉದ್ಘಾಟನೆ ಮಾಡಲು ಆಗಮಿಸಿದ್ದ ಪ್ರೊ|| ಪಿ. ಶಿವರಾಮಯ್ಯನವರ ಕಿರುಪರಿಚಯದೊಂದಿಗೆ ಮತ್ತು ಅಧ್ಯಾಪಕ ವರ್ಗದವರನ್ನೂ ಪರಿಚಯಿಸಿ, ವಿದ್ಯಾರ್ಥಿ ವರ್ಗಕ್ಕೂ ಸ್ವಾಗತ ಕೋರಿದರು.

ಪ್ರೊ|| ಶಿವರಾಮಯ್ಯ ಅವರು ಹಳಗನ್ನಡ ಡಿಪ್ಲೊಮೊ ತರಗತಿಗಳ ಪಠ್ಯಕ್ರಮಗಳನ್ನು ಪರಿಶೀಲಿಸಿ ಆರು ತಿಂಗಳ ಅವಧಿಯ ಡಿಪ್ಲೊಮೊ ತರಗತಿಗೆ ಕನ್ನಡ ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಇರುವ ಪಠ್ಯವಿರುವುದನ್ನು ಗಮನಿಸಿ, ವಿವಿಧ ವಯೋಮಾನದ ವಿದ್ಯಾರ್ಥಿಗಳು ತಮ್ಮ ಸ್ವಂತ ಆಸಕ್ತಿಯಿಂದ ಹೆಚ್ಚಿನ ಜ್ಞಾನ ಸಂಪಾದಿಸಲು ಸಾಧ್ಯವಿರುವುದೆಂಬ ಅಭಿಪ್ರಾಯ ವ್ಯಕ್ತಪಡಿಸಿದರು. ಜ್ಞಾನಾರ್ಜನೆಯಿಂದ ಜಗತ್ತನ್ನು ನೋಡುವ ದೃಷ್ಟಿ ಹೊಸ ಕಣ್ಣಿನಿಂದ ಸಾಧ್ಯವಿರುವುದಾಗಿ ಮತ್ತು ಹಳಗನ್ನಡ ಕಾವ್ಯಗಳನ್ನು ಓದುವುದರಿಂದ ಲಭಿಸುವ "ಆನಂದ", ಅನುಭವಿಸಬೇಕೇ ಹೊರತು, ವ್ಯಕ್ತಪಡಿಸಲು ಸಾಧ್ಯವಿಲ್ಲವೆಂದರು. ಪ್ರಾಚೀನ ಕವಿಗಳನ್ನು ಅರ್ಥಮಾಡಿಕೊಳ್ಳಲು, ಅವರ ಕಾವ್ಯಗಳನ್ನು ಹಳಗನ್ನಡ ಭಾಷೆಯಲ್ಲಿಯೇ ಓದಬೇಕೆಂಬ ಅಭಿಪ್ರಾಯವನ್ನು ಒತ್ತಿಹೇಳಿದರು ಹಾಗೂ ಸೋದಾಹರಣವಾಗಿ ಕೆಲವು ಸಂಗತಿಗಳನ್ನು ಸಭೆಯಲ್ಲಿ ಹಂಚಿಕೊಂಡರು.

ಡಾ|| ವಿಜಯಾ ಸುಬ್ಬರಾಜ್ ಅವರು ವಂದನೆ ಸಲ್ಲಿಸಿದರು.

## ಸಂಪಾದಕೀಯ

ಮತ್ತೊಮ್ಮೆ ನವೆಂಬರ್ ತಿಂಗಳು ಬಂದಿದೆ.ಎಲ್ಲೆಲ್ಲೂ ಕರ್ನಾಟಕ ರಾಜ್ಯೋತ್ಸವದ ಅಂಗವಾಗಿ ಹತ್ತು ಹಲವು ರೀತಿಯ ಕಾರ್ಯಕ್ರಮಗಳನ್ನು ನಡೆಸಲಾಗುತ್ತದೆ. ಈ ಕಾರ್ಯಕ್ರಮಗಳ ಪೈಕಿ ದೀರ್ಘಾವಧಿಯಲ್ಲಿ ಉಪಯುಕ್ತವಾಗುವ ಕಾರ್ಯಕ್ರಮಗಳ ಸಂಖ್ಯೆ ಬಹಳ ಕಡಿಮೆ ಇರುತ್ತದೆ. ರಾಜ್ಯ ಸರ್ಕಾರದ ಕೆಲವು ಘೋಷಣೆಗಳು ಹಾಗೂ ಕೆಲವು ಬೃಹತ್ ಸಂಸ್ಥೆಗಳ ನಿರ್ಣಯಗಳನ್ನು ಹೊರತು ಪಡಿಸಿದರೆ ಬಹುತೇಕವಾಗಿ ಅಂದಿನ ದಿನದ ಉತ್ಸಾಹಕ್ಕಾಗಿ ನಡೆಸುವ ಕಾರ್ಯಕ್ರಮಗಳೇ ಹೆಚ್ಚು. ನವೆಂಬರ್ ತಿಂಗಳಿನಲ್ಲಿ ನಡೆಸಲಾಗುವ ಕಾರ್ಯಕ್ರಮಗಳಿಗಾಗಿಯೇ ಮೀಸಲಿಡುವ ಶ್ರಮ, ಸಮಯ ಹಾಗೂ ಹಣ, ಇವುಗಳನ್ನು ಇನ್ನಷ್ಟು ಅರ್ಥಪೂರ್ಣವಾಗಿ ಬಳಸಿಕೊಳ್ಳುವತ್ತ ನಮ್ಮ ಚಿಂತನೆಗಳು ಸಾಗಬೇಕಿದೆ.

ಹೊಂಗನಸು ಪತ್ರಿಕೆಯನ್ನು ಹೆಚ್ಚು ವರ್ಣರಂಜಿತ ಹಾಗೂ ಹೆಚ್ಚು ಉಪಯುಕ್ತವಾಗಿ ಮಾಡಲು ಶ್ರಮಿಸುತ್ತಿದ್ದೇವೆ. ನಿಮ್ಮ ಸಲಹೆಗಳು ಹಾಗೂ ಪ್ರತಿಕ್ರಿಯೆಗಳಿಗೆ ಸ್ವಾಗತ.

**ಬಿ.ಆರ್ ರವೀಂದ್ರನಾಥ್**
ಸಂಪಾದಕರು.......

### ನವೆಂಬರ್ ತಿಂಗಳಿನಲ್ಲಿ ಜನಿಸಿದ ಸಾಹಿತ್ಯೋಪಾಸಕರು

| | |
|---|---|
| ಶಿ.ಶಿ. ಬಸವನಾಳ | ೩-೧೧-೧೮೯೩ |
| ಸಂಶಿಭೂಸನೂರ ಮಠ | ೮-೧೧-೧೯೧೦ |
| ರಾಶಿ- ಡಾಎಂ ಶಿವರಾಂ | ೧೦-೧೧-೧೯೦೪ |
| ತಿರುಮಲೆ ರಾಜಮ್ಮ | ೨೦-೧೧-೧೯೦೦ |
| ಎಂ. ಎಸ್. ಪುಟ್ಟಣ್ಣ | ೨೧-೧೧-೧೮೫೪ |
| ತೀನಂ ಶ್ರೀಂಠಯ್ಯ | ೨೬-೧೧-೧೯೦೬ |
| ಬಿ.ಸಿ. ರಾಮಚಂದ್ರ ಶರ್ಮಾ | ೨೮-೧೧-೧೯೨೫ |
| ಎಂ.ಎಂ. ಕಲಬುರ್ಗಿ | ೨೮-೧೧-೧೯೩೮ |

### ನವೆಂಬರ್ ತಿಂಗಳಿನಲ್ಲಿ ನಿಧನರಾದ ಸಾಹಿತ್ಯೋಪಾಸಕರು

| | |
|---|---|
| ಬಿ.ಜಿ. ಎಲ್. ಸ್ವಾಮಿ | ೨-೧೧-೧೯೮೦ |
| ಸಂಶಿಭೂಸನೂರ ಮಠ | ೬-೧೧-೧೯೯೧ |
| ದಿನಕರ ದೇಸಾಯಿ | ೮-೧೧-೧೯೮೨ |
| ಕುವೆಂಪು | ೧೦-೧೧-೧೯೯೪ |
| ಹಾ.ಮಾ. ನಾಯಕ್ | ೧೦-೧೧-೨೦೦೦ |
| ಎಂ. ಗೋಪಾಲಕೃಷ್ಣ ಅಡಿಗ | ೧೪-೧೧-೧೯೯೨ |

## ಆಧುನಿಕ ವಚನಗಳು

-ಜಿ. ಅಬ್ದುಲ್ ಬಷೀರ್

ಅಲ್ಲ ಅಲ್ಲ ಎನ್ನುವವರು ಕೆಲವರು
ಇಲ್ಲ ಇಲ್ಲ ಎನ್ನುವವರು ಕೆಲವರು
ಅಲ್ಲ ಇಲ್ಲಗಳ ಚರ್ಚೆಯಲ್ಲಿ
ಮುಲ್ಲಾಗಳು ಮಧ್ಯೆ ನುಸುಳುವರು
ಆಗ ಎಲ್ಲಾ ಖುಲ್ಲಾ ಆಗುವುದು
ನೀ ಕಾಣುವೆ ಅಲ್ಲವೆ 'ಅಲ್ಲಾರಖಾ' ॥೨೮॥

## ಪ್ರಕಟಣೆ

ಬಿಎಂಶ್ರೀ ಪ್ರತಿಷ್ಠಾನವು 37 ವರ್ಷಗಳಿಂದ ಸಾವಿರಾರು ಕಾರ್ಯಕ್ರಮಗಳು ಹಾಗೂ ಚಟುವಟಿಕೆಗಳನ್ನು ನಡೆಸಿಕೊಂಡು ಬರುತ್ತಿದ್ದು ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಅವಿರತವಾಗಿ ಸಕ್ರಿಯವಾಗಿರುತ್ತದೆ. ಬಿಎಂಶ್ರೀ ಪ್ರತಿಷ್ಠಾನವು ನಡೆದು ಬಂದ ದಾರಿಯನ್ನು ದಾಖಲಿಸಿ ಸಾಧನೆಗಳನ್ನು ಗುರುತಿಸಿ ಇದನ್ನು ಸಾಧ್ಯಗೊಳಿಸಿದ ಹಲವಾರು ಮಹನೀಯರ ಕೊಡುಗೆಗಳನ್ನು ಸ್ಮರಿಸಿಕೊಳ್ಳುವ ಕಾರ್ಯವನ್ನು ಕೈಗೊಳ್ಳಲು ಪ್ರತಿಷ್ಠಾನವು ಚಿಂತನೆ ನಡೆಸುತ್ತಿದೆ.

ಇಂತಹ ಬೃಹತ್ ಕಾರ್ಯವನ್ನು ಸಾಧಿಸಲು ಪ್ರತಿಷ್ಠಾನದ ಜೊತೆ ಕೈಗೂಡಿಸಿ ಕೆಲಸ ಮಾಡುವಂತಹ ಸ್ವಯಂಪ್ರೇರಿತರು ಬೇಕಾಗಿರುತ್ತಾರೆ. ಈ ಮಹತ್ವದ ಕಾರ್ಯದಲ್ಲಿ ಭಾಗವಹಿಸುವಂತೆ ಎಲ್ಲ ಸದಸ್ಯರನ್ನೂ ನಮಗೆ ಬೆಂಬಲ ನೀಡಬೇಕೆಂದು ಕೋರುತ್ತವೆ. ಆಸಕ್ತರು ದಯವಿಟ್ಟು ಸಂಪರ್ಕಿಸಿ: ಗೌರವ ಕಾರ್ಯದರ್ಶಿ, ಬಿಎಂಶ್ರೀ ಪ್ರತಿಷ್ಠಾನ, ಬೆಂಗಳೂರು

## ಕನ್ನಡ ಹಳಗನ್ನಡ ತರಗತಿಗಳ ಧ್ವನಿಮುದ್ರಿಕೆಗಳು ಲಭ್ಯ

ಇದೀಗ ಪ್ರಾರಂಭಗೊಂಡಿರುವ 6 ತಿಂಗಳ ಹಳಗನ್ನಡ ಡಿಪ್ಲೋಮೊ ತರಗತಿಗಳಲ್ಲಿ ವಿದ್ವಾಂಸರು ನೀಡುವ ಉಪನ್ಯಾಸಗಳ ಧ್ವನಿಮುದ್ರಿಕೆಗಳು ಈ ತರಗತಿಗಳ ವಿದ್ಯಾರ್ಥಿಗಳಿಗೆ ಲಭ್ಯಗೊಳಿಸುವ ಸೌಲಭ್ಯವನ್ನು ಪ್ರತಿಷ್ಠಾನವು ಒದಗಿಸುತ್ತಿದೆ. ತರಗತಿಗಳಿಗೆ ಹಾಜರಾಗದ ವಿದ್ಯಾರ್ಥಿಗಳು ಹಾಗೂ ಉಪನ್ಯಾಸಗಳನ್ನು ಮತ್ತೊಮ್ಮೆ ಮನನ ಮಾಡಿಕೊಳ್ಳುವ ಆಸಕ್ತಿ ಇರುವ ವಿದ್ಯಾರ್ಥಿಗಳ ಬಳಕೆಗಾಗಿ ಪ್ರತಿಷ್ಠಾನವು ಈ ಸೌಲಭ್ಯವನ್ನು ನೀಡಲಾಗುತ್ತಿದೆ.ಈ ಸೌಲಭ್ಯವನ್ನುಉಚಿತವಾಗಿ ನೀಡಲಾಗುತ್ತಿದೆ.

ವಿವರಗಳಿಗೆ ಪ್ರತಿಷ್ಠಾನದ ಕಚೇರಿಯನ್ನು ಸಂಪರ್ಕಿಸಿ.

## ಕರ್ನಾಟಕ ಲೋಚನ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಪ್ರಕಟಿಸುವ ಷಾಣ್ಮಾಸಿಕ ವಿದ್ವತ್ ಪತ್ರಿಕೆ ಕರ್ನಾಟಕ ಲೋಚನ ಪತ್ರಿಕೆಗೆ ಸಾಹಿತ್ಯ-ಸಂಸ್ಕೃತಿಗೆ ಸಂಬಂಧಿಸಿದ ವಿಮರ್ಶಾತ್ಮಕ/ಸಂಶೋಧನಾತ್ಮಕ ಲೇಖನಗಳನ್ನು ವಿದ್ವಾಂಸರಿಂದ ಆಹ್ವಾನಿಸಿದೆ. ಲೇಖಕರು ತಮ್ಮ ಲೇಖನಗಳನ್ನು ಹಸ್ತಪ್ರತಿ ಅಥವಾ ಬೆರಳಚ್ಚು ರೂಪದಲ್ಲಿ ಪ್ರತಿಷ್ಠಾನದ ವಿಳಾಸಕ್ಕೆ ರವಾನಿಸಬಹುದು ಅಥವಾ bmsrilochana@gmail.comಗೆ ಈ ಮೈಲ್ ಮೂಲಕ ರವಾನಿಸಬಹುದು.

### ಕರ್ನಾಟಕ ಲೋಚನ ವಿದ್ವತ್ ಪತ್ರಿಕೆಗೆ ಚಂದಾ

ಪ್ರತಿಷ್ಠಾನವು ಪ್ರಕಟಿಸುತ್ತಿರುವ ಕರ್ನಾಟಕ ಲೋಚನ ವಿದ್ವತ್ ಪತ್ರಿಕೆಗೆ ಚಂದಾ ವಿವರ: ವಾರ್ಷಿಕ ರೂ. 100/- (ವರ್ಷದಲ್ಲಿ ಎರಡು ಸಂಚಿಕೆಗಳನ್ನು ಪ್ರಕಟಿಸಲಾಗುತ್ತಿದೆ) ಆಜೀವ ಚಂದಾ ರೂ. 1500/- ಆಗಿರುತ್ತದೆ. ಎಲ್ಲಾ ಸಾಹಿತ್ಯಾಸಕ್ತರೂ ಈ ವಿದ್ವತ್ ಪತ್ರಿಕೆಗೆ ಚಂದಾದಾರಾಗಬೇಕೆಂದು ಕೋರುತ್ತೇವೆ.

# ನವೆಂಬರ್ ೨೦೧೭ ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

## ಸ್ಥಳ : ಎಂ.ವಿ.ಸೀ. ಸಭಾಂಗಣ, ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನ



**೦೮-೧೧-೨೦೧೭ ಬುಧವಾರ ಸಂಜೆ- ೬-೦೦ ಗಂಟೆಗೆ**

**ಗಮಕವಾಹಿನಿ-೨೨**

'ಪಂಪಭಾರತ' ಸಂಚಿಕೆ- ೯ (ಮುಂದುವರೆದ ಭಾಗ)

ವಾಚನ :ಕು॥ ವರ್ಣಿಕಾ

ವ್ಯಾಖ್ಯಾನ :ಶ್ರೀಮತಿ ನಂ. ನಾಗಲಕ್ಷ್ಮಿ

ನೇತೃತ್ವ- ಶ್ರೀಮತಿ ಸಿ.ವಿ. ಶ್ರೀಮತಿ



**೧೫-೧೧-೨೦೧೭ ಬುಧವಾರ ಸಂಜೆ- ೬-೦೦ಗಂಟೆಗೆ**

**"ಅಕ್ಕರಗೊಟ್ಟಿ"**

ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ

ವಿಷಯ :ನಾಗರವಿಲ್ಲಮ್ಮ-ಒಂದು ವಿಶ್ಲೇಷಣೆ

ಚಾಲನೆ :ಡಾ॥ ರಾಜಶ್ರೀ ಕಿಶೋರ



**೨೦-೧೧-೨೦೧೭ ಸೋಮವಾರ ಸಂಜೆ -೬-೦೦ಗಂಟೆಗೆ**

**ಕನ್ನಡ ಸಂಸ್ಕೃತಿದರ್ಶನ**

(ಸಾಕ್ಷ್ಯಚಿತ್ರ ಸದರ್ಶನ)



**೨೨-೧೧-೨೦೧೭ ಬುಧವಾರ ಸಂಜೆ ೬-೦೦ಗಂಟೆಗೆ**

**ಶ್ರೀಮತಿ ವಿ.ಜಿ. ಕುಸುಮ ಟ್ರಸ್ಟ್ ದತ್ತಿ ಅಡಿಯಲ್ಲಿ**

**ಸರ್ ಸಿ.ವಿ.ರಾಮನ್ ಸ್ಮಾರಕ ವಿಜ್ಞಾನ ಉಪನ್ಯಾಸ**

ಡಾ॥ ಟಿ.ಆರ್.ಅನಂತರಾಮು

(ಖ್ಯಾತ ಭೂ ವಿಜ್ಞಾನಿಗಳು, ವಿಜ್ಞಾನ ಲೇಖಕರು)

ವಿಷಯ : ಬದಲಾಗುತ್ತಿರುವ ಹವಮಾನ



**೨೭-೧೧-೨೦೧೭ ಸೋಮವಾರ ಸಂಜೆ೬-೦೦ ಗಂಟೆಗೆ**

**ತೀ.ನಂ.ಶ್ರೀ ಸ್ಮಾರಕ ದತ್ತಿ ಉಪನ್ಯಾಸ**

ಡಾ॥ಎಚ್. ಎಸ್. ರಾಘವೇಂದ್ರರಾವ್

(ನಾಡಿನ ಖ್ಯಾತ ವಿಮರ್ಶಕರು)

ವಿಷಯ :ಕನ್ನಡ ವಿಮರ್ಶೆ-ದೇಶಿ ಸಾಧ್ಯತೆಗಳು

ಕಾರ್ಯಕ್ರಮಗಳಿಗೆ ಸಹಕಾರ: ಕನ್ನಡ ಮತ್ತು ಸಂಸ್ಕೃತಿ ಇಲಾಖೆ

## ಕೋರಿಕೆ :

**ಹೊಂಗನಸು ಯಶಸ್ವಿಯಾಗಲು ನಿಮ್ಮ ಆಶೀರ್ವಾದ, ಬೆಂಬಲ ಹಾಗೂ ಸಹಕಾರಗಳು ನಮಗೆ ಅಗತ್ಯವಾಗುತ್ತವೆ. ಈ ಮಾಸಿಕದ ವಾರ್ಷಿಕ ಚಂದಾ ಹಣ ಕೇವಲ ರೂ. 20/ – ಆಗಿದ್ದು ಐದು ವರ್ಷಗಳ ಚಂದಾಹಣ ರೂ, 100/– ಮಾತ್ರ. ನೀವುಗಳು ಈ ಮಾಸಿಕಕ್ಕೆ ಚಂದಾದಾರರಾಗಲು ಕೋರುತ್ತೇವೆ.**

# ಬಿ.ಎಂ.ಶ್ರೀ ಸ್ಮಾರಕದಲ್ಲಿ ಅಕ್ಟೋಬರ್ 2017 ತಿಂಗಳಿನಲ್ಲಿ ನಡೆದ ಕಾರ್ಯಕ್ರಮಗಳು

## ಗಮಕವಾಹಿನಿ–೨೧

೦೪–೧೦–೨೦೧೭

'ಪಂಪಭಾರತ' ಸಂಚಿಕೆ– ೮ (ಮುಂದುವರೆದ ಭಾಗ)

ವಾಚನ : ಕು॥ ರಂಜನಿ

ವ್ಯಾಖ್ಯಾನ : ಡಾ॥ ವೈ. ಎಸ್. ಗಾಯತ್ರಿ

ನೇತೃತ್ವ– ಶ್ರೀಮತಿ ಸಿ.ವಿ. ಶ್ರೀಮತಿ, ಗಮಕ ಕಲಾ ಪ್ರತಿಷ್ಠಾನ

ಪಂಪಭಾರತ ಸಂಗ್ರಹ : ಡಾ॥ ಪಿ.ವಿ.ನಾರಾಯಣ

ಗಮಕಕಲಾ ಪ್ರತಿಷ್ಠಾನದ ಸಹಯೋಗದಲ್ಲಿ ನಡೆದ ಈ ಮಾಲೆಯ ಪ್ರಸ್ತುತ ಖಾಂಡವ ದಹನದ ಪ್ರಕರಣವನ್ನು ತೆಗೆದುಕೊಳ್ಳಲಾಗಿತ್ತು. ಖಾಂಡವ ದಹನದ ಚಿತ್ರಣವನ್ನು ಕುಮಾರಿ ರಂಜನಿ ವಾಚನದ ಮೂಲಕ ಚಿತ್ರಿಸಿದರೆ, ತಮ್ಮ ವ್ಯಾಖ್ಯಾನದ ಮೂಲಕ ಡಾ॥ ವೈ.ಎಸ್. ಗಾಯಿತ್ರಿಯವರು ಆಸಕ್ತರ ಮೆಚ್ಚುಗೆಗೆ




ಪಾತ್ರರಾದರು. ಡಾ॥ಪಿ.ವಿ.ನಾರಾಯಣ, ಕಲಾವಿದರನ್ನು ಸ್ವಾಗತಿಸಿ ಸಭೆಗೆ ಪರಿಚಯಿಸಿದರು.

ಡಾ॥ ವಿಜಯಾ ಸುಬ್ಬರಾಜ್ ಅವರು ಕಲಾವಿದರಿಗೂ ಹಾಗೂ ಸಭಿಕರಿಗೂ ವಂದಿಸಿದರು.

## ಕನ್ನಡ ಸಂಸ್ಕೃತಿ ದರ್ಶನ ಕಾರ್ಯಕ್ರಮ ಮಾಲೆ

ದಿನಾಂಕ ೧೬ನೇ ಅಕ್ಟೋಬರ್ ೨೦೧೭ರಂದು ಕನ್ನಡ ಸಂಸ್ಕೃತಿದರ್ಶನದಲ್ಲಿ ಬೌದ್ಧಧರ್ಮ ಮತ್ತು ಕರ್ನಾಟಕದಲ್ಲಿ ಸಂಗೀತ ವಾದ್ಯಗಳು ಎಂಬ ಚಿತ್ರವನ್ನು ತೋರಿಸಲಾಯಿತು.

೦೯–೧೦–೨೦೧೭

## "ಅಕ್ಕರಗೊಟ್ಟಿ"

ತಿಂಗಳ ಮುಕ್ತ ಸಂಸ್ಕೃತಿ ಚಿಂತನೆ

ವಿಷಯ : ರನ್ನನ ಗದಾಯುದ್ಧ

ಚಾಲನೆ : ಶ್ರೀಮತಿ ಪಿ. ವನಜ



ಕನ್ನಡ ಸಹ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಎಚ್.ಎಸ್.ಆರ್. ಬಡಾವಣೆ, ಬೆಂಗಳೂರು

ತೀ.ನಂ.ಶ್ರೀ ಅವರು ಸಂಪಾದಿಸಿದ ರನ್ನನ ಗದಾಯುದ್ಧ ಸಂಗ್ರಹದ ಭೀಮಸೇನಪ್ರತಿಜ್ಞೆ ಭಾಗದ ಹತ್ತೊಂಬತ್ತನೇ ಪದ್ಯವನ್ನು ಚರ್ಚೆಗೆ ತೆಗೆದುಕೊಳ್ಳಲಾಗಿತ್ತು. ಈ ಪದ್ಯದ ಮೂಲಕ ರನ್ನನ ದ್ರೌಪದಿಯ ಚಹರೆಗಳನ್ನು ಗುರುತಿಸುವ ಮೂಲಕ ಇವರು ಚರ್ಚೆಯನ್ನು ಪ್ರಾರಂಭಿಸಿದರು.

ಇಡೀ ಗದಾಯುದ್ಧದಲ್ಲಿ ದ್ರೌಪದಿಯ ಪಾತ್ರ ನೇರವಾಗಿ ಬರುವುದು ಎರಡೇ ಸಂದರ್ಭದಲ್ಲಿ. ಕುರುಕ್ಷೇತ್ರ ಯುದ್ಧದ ಕೊನೆಯ ಹಂತದಲ್ಲಿ ಭೀಮನನ್ನು ದ್ರೌಪದಿ ಯುದ್ಧಕ್ಕೆ ಪ್ರೇರೇಪಿಸುವ ಸಂದರ್ಭ ಒಂದನೆಯದಾದರೆ ಯುದ್ಧವೆಲ್ಲ ಮುಗಿದು ತೊಡೆ ಮುರಿದುಕೊಂಡು ಬಿದ್ದಿದ್ದ ದುರ್ಯೋಧನನನ್ನು ನೋಡಲು ದ್ರೌಪದಿ ಆಗಮಿಸುವುದು ಎರಡನೆಯ ಸಂದರ್ಭ. ಭೀಷ್ಮ, ಧೃತರಾಷ್ಟ್ರನ ಒತ್ತಾಯಕ್ಕೆ ಮಣಿದು ಧರ್ಮರಾಯ ಯುದ್ಧವನ್ನು ನಿರಾಕರಿಸಿ ಸಂಧಿ ಮಾಡಿಕೊಳ್ಳಲು ನಿರ್ಧರಿಸಿದರೆ ಕೌರವರು ತನಗೆ ಮಾಡಿದ್ದ ಅವಮಾನಕ್ಕೆ ಪ್ರತೀಕಾರವನ್ನು ತೀರಿಸಿಕೊಳ್ಳಲು ಸಾಧ್ಯವಾಗುವುದಿಲ್ಲವೆಂಬ ಆತಂಕವನ್ನು ಭೀಮನ ಬಳಿ ವ್ಯಕ್ತಪಡಿಸುವ ಸಂದರ್ಭದಲ್ಲಿ ದ್ರೌಪದಿಯ ವ್ಯಕ್ತಿತ್ವ ಅತ್ಯಂತ ದಿಟ್ಟ ವ್ಯಕ್ತಿತ್ವವಾಗಿ ಚಿತ್ರಿತವಾಗಿದೆ. ಇಲ್ಲಿ ಕಾಣುವ ದ್ರೌಪದಿ ರಾಮಮನೋಹರ ಲೋಹಿಯ ಅವರು ಹೇಳುವಂತೆ ಅಪ್ಪಟ ರಾಜಕಾರಣಿಯ ವ್ಯಕ್ತಿತ್ವ. ತನಗಾದ ಅವಮಾನವನ್ನು ತೀರಿಸಿಕೊಳ್ಳಲು ಅಸಹಾಯಕಳಾದ ಇವಳು ಭೀಮನನ್ನು ಕೆರಳುವಂತೆ ಮಾಡಲು ಬಳಸುವ ತಂತ್ರಗಳು ಅವಳ ಬೌದ್ಧಿಕ ವ್ಯಕ್ತಿತ್ವವನ್ನು ಅನಾವರಣಗೊಳಿಸುತ್ತದೆ. ಆದರೆ ಎರಡನೆಯ ಸಂದರ್ಭದಲ್ಲಿ ತನ್ನ ಪ್ರತಿಜ್ಞೆ ನೆರವೇರಿದ್ದನ್ನು ನೋಡಲು ಬರುವ ದ್ರೌಪದಿಯನ್ನು ದೇಹಮೂಲವಾಗಿ ಚಿತ್ರಿಸಲಾಗಿದೆ. ಮುಡಿ ಕಟ್ಟುವುದನ್ನೇ ಮರೆತ ದ್ರೌಪದಿಯ ಮುಡಿಯನ್ನು ತಾನೇ ಕಟ್ಟುವ ಭೀಮನಿಗೆ ದ್ರೌಪದಿಯ ದೇಹ ಸೌಂದರ್ಯ ಕಂಡ ರೀತಿಯನ್ನು ಕವಿ ಹನ್ನೆರಡಕ್ಕಿಂತಲೂ ಹೆಚ್ಚಿನ ಪದ್ಯಗಳಲ್ಲಿ ವಿವರಿಸುತ್ತಾನೆ. ಇದಕ್ಕೆ ಕಾರಣಗಳೇನು? ಇದರಿಂದ ದ್ರೌಪದಿಯ ವ್ಯಕ್ತಿತ್ವಕ್ಕೆ ಧಕ್ಕೆ ಬರುವುದಿಲ್ಲವೆ? ಶೃಂಗಾರ ರಸಕ್ಕೆ ಯುದ್ಧದ ಸಂದರ್ಭ ಎಷ್ಟರಮಟ್ಟಿಗೆ ಸರಿ?ದ್ರೌಪದಿಯನ್ನು ದಿಟ್ಟೆ ಎಂದು ಚಿತ್ರಿಸಿದ ಕವಿಯೇ ಮತ್ತೆ ಅವಳನ್ನು ದೇಹಕ್ಕೆ ಸೀಮಿತ ಮಾಡಲು ಕಾರಣಗಳೇನು? ಎಂಬ ಪ್ರಶ್ನೆಗಳನ್ನು ಎತ್ತಿ ಚರ್ಚೆಯನ್ನು ಪ್ರಾರಂಭಿಸಿದರು. ಈ ಚರ್ಚೆಯಲ್ಲಿ ಡಾ. ಪಿ.ವಿ ನಾರಾಯಣ, ಡಾ.ಗಣೇಶ್, ಡಾ. ವಿಜಯ ಸುಬ್ಬರಾಜ್ ಮುಂತಾದವರು ಭಾಗವಹಿಸಿದ್ದರು.

# ಹಸ್ತಪ್ರತಿ ಸಂಗ್ರಹಾಲಯಕ್ಕೆ ಬಿಡದಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ವಿದ್ಯಾರ್ಥಿಗಳ ಭೇಟಿ







ರಾಮನಗರಜಿಲ್ಲೆ, ಬಿಡದಿ ಸರ್ಕಾರಿ ಪ್ರಥಮದರ್ಜೆ ಕಾಲೇಜಿನ ಇಪ್ಪತ್ತನಾಲ್ಕು ಪ್ರಥಮ ಮತ್ತು ಅಂತಿಮ ಬಿ.ಎ ಐಚ್ಛಿಕ ಕನ್ನಡ ವಿಭಾಗದ ವಿದ್ಯಾರ್ಥಿಗಳು ಕ್ಷೇತ್ರಾಧ್ಯಯನದ ದೃಷ್ಟಿಯಿಂದ ಹಸ್ತಪ್ರತಿ ಅಧ್ಯಯನ –ಶೈಕ್ಷಣಿಕ ಪ್ರಾತಕ್ಷಿಕೆ ತರಗತಿಯ ನಿಮಿತ್ತ ನಮ್ಮ ಹಸ್ತಪ್ರತಿ ಸಂಗ್ರಹಾಲಯಕ್ಕೆ ದಿನಾಂಕ 14 ಅಕ್ಟೋಬರ್ 2017ರಂದು ಭೇಟಿ ನೀಡಿದರು. ಈ ವಿದ್ಯಾರ್ಥಿಗಳ ತಂಡದ ಭೇಟಿಯನ್ನು ಕಾಲೇಜಿನ ಕನ್ನಡ ವಿಭಾಗದ ಮುಖ್ಯಸ್ಥರು ಹಾಗೂ ಸಹಾಯಕ ಪ್ರಾಧ್ಯಾಪಕರು ಶ್ರೀಮತಿ ಎನ್. ಶೋಭಾರಾಣಿ, ಶ್ರೀ ಬಿ.ಸಿ.ನವೀನ್ ಕುಮಾರ್, ಕನ್ನಡ ಉಪನ್ಯಾಸಕರು, ಮತ್ತು ಶ್ರೀ ಕೃಷ್ಣಯ್ಯ, ಕನ್ನಡ ಉಪನ್ಯಾಸಕರು ಆಯೋಜಿಸಿದ್ದರು.

ಪ್ರತಿಷ್ಠಾನದ ಸ್ಥಾಪನೆ, ಹಸ್ತಪ್ರತಿಗಳ ಬಗ್ಗೆ ನಾಡಿನಾದ್ಯಂತ ಜಾಗೃತಿ ಮೂಡಿಸಿದ ವಿದ್ವಾಂಸ–ಕವಿ–ಕಲಾವಿದ–ನಾಡು–ನುಡಿ ಹೋರಾಟಗಾರರಾದ ಪ್ರೊ॥ಎಂ.ವಿ. ಸೀತಾರಾಮಯ್ಯನವರ ಪರಿಶ್ರಮ, 'ಹಸ್ತಪ್ರತಿಶಾಸ್ತ್ರ' ಎಂಬ ಪರಿಕಲ್ಪನೆಯ ಹೊಸ ಆಯಾಮ, ಹಸ್ತಪ್ರತಿ ಅಧ್ಯಯನ ಶಾಸ್ತ್ರ, ಪ್ರತಿಷ್ಠಾನದ ಇನ್ನಿತರ ಚಟುವಟಿಕೆಗಳ ಬಗ್ಗೆ ಸಂಕ್ಷಿಪ್ತವಾಗಿ ವಿದ್ಯಾರ್ಥಿಗಳಿಗೆ ಹಸ್ತಪ್ರತಿ ಸಂಯೋಜನಾಧಿಕಾರಿಗಳಾದ ಶ್ರೀ ಬಿ.ಎಸ್. ಗುರುಪ್ರಸಾದ್ ಅವರು ಮಾಹಿತಿ ನೀಡಿದರು.

ಹಸ್ತಪ್ರತಿ ವಿಷಯಕ್ಕೆ ಸಂಬಂಧಿಸಿದಂತೆ ಬರಹದ ಆರಂಭ, ಬರಹದ ವಿಧಾನ, ವಿವಿಧ ಬರಹದ ಸಾಮಾಗ್ರಿಗಳು, ತಾಡಪತ್ರಗಳ ವೈವಿಧ್ಯತೆ, ಪ್ರಾಚೀನ ರಕ್ಷಣಾವಿಧಾನ, ಕವಿಗಳಿಂದ ಬರಹಗಾರರು, ಲಿಪಿಕಾರರ ವರ್ಗಗಳು, ಹಸ್ತಪ್ರತಿಗಳ ಸ್ವರೂಪ– ಇತಿಹಾಸ– ಬಹುಶಾಸ್ತ್ರೀಯ ನೆಲೆಗಳಲ್ಲಿ ಹಸ್ತಪ್ರತಿಗಳ ಅಧ್ಯಯನ, ವಿಷಯಗಳ ಬಗ್ಗೆ ಸಂಕ್ಷಿಪ್ತವಾಗಿ ತಿಳಿಸಿ, ಪ್ರತಿಷ್ಠಾನದ ಪ್ರಕಟಣೆಗಳ ಪರಿಚಯ ಮಾಡಿಕೊಟ್ಟರು. ವಿದ್ಯಾರ್ಥಿಗಳು ಸಂಗ್ರಹಾಲಯದಲ್ಲಿನ ವಿವಿಧ ಲಿಖಿತ ಮತ್ತು ಲೇಖನ ಸಾಮಾಗ್ರಿಗಳನ್ನು ವೀಕ್ಷಿಸಿದರು.

## ಹಳಗನ್ನಡ ಡಿಪ್ಲೊಮೊ ತರಗತಿಗಳು ನಡೆಯುವ ದಿನಗಳು ಹಾಗೂ ಸಮಯ

| ಕ್ರಸಂ | ವಾರದ ದಿನಗಳು | ಸಮಯ | ಸ್ಥಳ |
|---|---|---|---|
| 1 | ಗುರುವಾರ | 5–30 ರಿಂದ 7–00ರವರೆಗೆ | |
| 2 | ಶುಕ್ರವಾರ | 5–30ರಿಂದ 7–00 ರವರೆಗೆ | ಎರಡನೆಯ ಮಹಡಿ ತರಗತಿ ಕೊಠಡಿ |
| 3 | ಶನಿವಾರ | 4–00 ರಿಂದ5–30 ರವರೆಗೆ | |
| | | 5–30 ರಿಂದ 7–00 ರವರೆಗೆ | |

# ಪದಚರಿತೆ

ಒಂದಷ್ಟು ಪದಗಳ

ಮೂಲಚೂಲಗಳ ಹುಡುಕಾಟ

– ಡಾ. ಪಿ.ವಿ. ನಾರಾಯಣ

**ತಾಳಿ:** ತಾಲಿ ಅಥವಾ ತಾಳಿ ಎಂಬ ರೂಪಗಳು ತೆಲುಗು, ತಮಿಳು, ಮಲಯಾಳಂ ಮತ್ತು ತುಳು ಭಾಷೆಗಳಲ್ಲಿಯೂ ದೊರೆಯುತ್ತದೆ. ಮದುವೆಯಲ್ಲಿ ಗಂಡು ಹೆಣ್ಣಿನ ಕೊರಳಿಗೆ ಕಟ್ಟುವ ಮಾಂಗಲ್ಯ ಅಥವಾ ಮಂಗಳಸೂತ್ರದ ಮಧ್ಯದ ಚಿನ್ನದ ಬಟ್ಟನ್ನು ತಾಲಿ ಎಂದು ಕರೆಯುತ್ತಾರೆಂಬುದು ಸರ್ವವಿದಿತ. 'ಪಂಪಭಾರತ'ದಲ್ಲಿ ತಾಳಿ ಎಂಬುದಕ್ಕೆ ಸಂವಾದಿಯಾಗಿ 'ಅಯ್ದೆಮಿನುಗು' ಎಂಬ ಶಬ್ದವಿದೆ ("ವರುಣಾನಿಯ ಕೊರಲೊಳ್ ಅಯ್ದೆಮಿನುಗುಮುಟಿಯೆ") ಅಯ್ದೆ ಎಂದರೆ ಸುಮಂಗಲಿ; ಅವಳ ಕೊರಳಿನ ಮಿನುಗುವ ವಸ್ತು, ಪ್ರಾಯಶಃ ಚಿನ್ನದ ತಾಳಿ. ಹರಿಹರನ 'ಗಿರಿಜಾ ಕಲ್ಯಾಣ'ದಲ್ಲಿ 'ತಾಳಿಗಟ್ಟು' ಎಂಬ ಪ್ರಯೋಗವಿದೆ ("ಚಂದ್ರಾಭರಣಂ ಮನಮೊಸೆದು ತಾಳಿಗಟ್ಟಿದನೆನೆ"). ರಾಘವಾಂಕನ 'ಹರಿಶ್ಚಂದ್ರ ಕಾವ್ಯ'ದಲ್ಲಿ, ಚಂದ್ರಮತಿಯು ಮಗ ರೋಹಿತಾಶ್ವ ಸತ್ತಾಗ ಅವನ ದೇಹವನ್ನು ಸುಡಲು ಶ್ಮಶಾನಕ್ಕೆ ಬರುತ್ತಾಳೆ. ಕೊಡಬೇಕಾದ ಮಸಣವಾಡಗೆಯ ಹಣ ತನ್ನಲ್ಲಿಲ್ಲವೆಂದಾಗ ಹರಿಶ್ಚಂದ್ರನು "ನಿನ್ನ ಕೊರಳಿನೊಳಿರ್ದ ಕಡುಚೆಲುವ ತಾಳಿಯನದನು ಅಡವನಿರಿಸಿ ನೀ ಬಿಡಿಸಿಕೊ ಬಳಿಕ" ಎನ್ನುತ್ತಾನಂತೆ. ತಾಳಿಯು ಚಿನ್ನದ್ದಾಗಿರುತ್ತಿತ್ತೆಂಬುದು ಇಲ್ಲಿ ಹೆಚ್ಚು ಸ್ಪಷ್ಟವಾಗಿದೆ.

ತಾಲ ಎಂಬುದು ಸಂಸ್ಕೃತದಲ್ಲಿ ಪನೆಮರಕ್ಕಿರುವ ಹೆಸರು. ತಾಲಿ ಅಥವಾ ತಾಳಿ ಎಂದರೂ ತಾಳೆಯ ಮರ ಎಂಬ ಅರ್ಥವಿದೆ. 'ಪಂಪಭಾರತ'ದಲ್ಲಿ "ಲವಂಗ ಲುಂಗ ಹಿಂತಾಳ ತಾಳೀ ತಮಾಳಳತಾಲ ಸುಂದರ ನಂದನ" ಎಂಬಲ್ಲಿ ಅನೇಕ ಮರಗಳ ಜೊತೆಗೆ ತಾಳಿಯ ಪ್ರಸ್ತಾಪವಿದೆ. ಚಿನ್ನದ ತಾಳಿಯು ಬಳಕೆಗೆ ಬರುವುದಕ್ಕೆ ಮುಂಚೆ ಪ್ರಾಯಶಃ ತಾಳೆಯ ಗರಿಯನ್ನು ಒಣಗಿಸಿ ನಂತರ ನೆನೆಸಿ ಮೆತ್ತಗೆ ಮಾಡಿ ಸುರುಳಿ ಸುತ್ತಿ ಕಟ್ಟಿಕೊಳ್ಳುವ ಪದ್ಧತಿಯಿತ್ತೆಂದು ವಿದ್ವಾಂಸರು ಊಹಿಸುತ್ತಾರೆ. ಅದಕ್ಕೇ ಅದು ತಾಳಿ ಎನ್ನಿಸಿಕೊಳ್ಳುತ್ತದೆ. ಸಂಸ್ಕೃತದಲ್ಲಿ ತಾಲಂಕ ಅಥವಾ ತಾಲಕ ಎಂದರೆ ಕಿವಿಯ ಓಲೆ. ಅದೂ ತಾಳೆಗರಿಯ ಸುರುಳಿ; ಅದಕ್ಕೆ ಕರ್ಣಪತ್ರ ಎಂಬ ಹೆಸರೂ ಇದೆ. ಪ್ರಾಯಶಃ ತಾಳಿಯೂ ಮೊದಲು ಅದೇ ರೂಪದಲ್ಲಿತ್ತು. ಗೌರಿಯ ಹಬ್ಬದ ದಿನ ಕೊಡುವ ಮೊರದ ಬಾಗಿನದಲ್ಲಿ ಇತರ ವಸ್ತುಗಳ ಜೊತೆ ಬಿಚ್ಚೋಲೆಯನ್ನು ಕೊಡುವುದು ರೂಢಿ.

* * *

**ತಿಂಗಳು1:** ಇದೊಂದು ದ್ರಾವಿಡ ಪದ: ಹಳಗನ್ನಡದಲ್ಲಿ ತಿಂಗಳ್ ಎಂಬ ರೂಪದಲ್ಲಿದ್ದು, ತಮಿಳು, ಮಲಯಾಳಂಗಳಲ್ಲಿ ತಿಙ್ಕಳ್ ಎಂದೂ ತುಳುವಿನಲ್ಲಿ ತಿಂಗೊಳು ಎಂದೂ ಬಳಕೆಯಲ್ಲಿದೆ. ಇದರ ಒಂದು ಅರ್ಥ ಚಂದ್ರ ಎಂದು. "ನಗೆಯೆಂಬ ನೆವದೆ ಬೆಳೆಗೀ ಮೊಗಮೆಂಬೀ ನೆವದೆ ತಿಂಗಳೊಳಗೆಸೆದಾದಂ ಸೊಗಯಿಸಿ ತೋರ್ಕುಂ ಲೋಚನಯುಗಂ" ಎಂಬುದು 'ಕವಿರಾಜಮಾರ್ಗ'ದ ವರ್ಣನೆ. "ತಿಂಗಳ ತಣ್ಣನಪ್ಪ ಕದಿರ್ದೊಂಗಲೊಳಭ್ಯಸಿಸಿತ್ತೋ" ಎಂದು ತನ್ನ ಮಾತಿನ ಬಂಧದ ಬಗ್ಗೆ ಅಗ್ಗಳ ತನ್ನ 'ಚಂದ್ರಪ್ರಭಪುರಾಣ'ದಲ್ಲಿ ಹೇಳಿಕೊಳ್ಳುತ್ತಾನೆ. "ತಿಂಗಳ ಸಿರಿಯಂತೆ ಸೋಲಿಸದೆ ಕಾವನ ಕಬ್ಬಮನದಾರನಾದೊಡಂ" ಎಂಬ ಹೆಮ್ಮೆಯ ಮಾತು 'ಕಬ್ಬಿಗರ ಕಾವ'ದ ಕವಿ ಆಂಡಯ್ಯನದ್ದು. "ಇಂಗಡಲ ಒಡನಾಡಿಯೋ ನೆಱ ತಿಂಗಳ ಸೋದರಮೋ" ಎಂಬ ಉದ್ಗಾರ ಷಡಕ್ಷರದೇವನ 'ರಾಜಶೇಖರ ವಿಳಾಸ'ದ್ದು. "ತಿಂಗಳಿಗೆ ತಂಪಿಹುದೆ ಸಾಗರಕೆ ಪೆಂಪಿಹುದೆ" ಎಂಬುದು ಗೋವಿಂದ ಪೈ ಅವರ 'ಗಿಳಿವಿಂಡು' ಕವನದ ಸಾಲು. ಚಂದ್ರಕಾಂತ ಶಿಲೆ ಎಂಬರ್ಥದಲ್ಲಿ 'ನೇಮಿನಾಥಪುರಾಣ'ದಲ್ಲಿ 'ತಿಂಗಳ್ಗಲ್' ಎಂಬ ಪ್ರಯೋಗವಿದೆ. ಶಿವನು ಚಂದ್ರಧರ; ಹೀಗಾಗಿ ಕನ್ನಡ ಕವಿಗಳನೇಕರು ಅಚ್ಚಗನ್ನಡದಲ್ಲಿ ಹೇಳುತ್ತಾರೆ: ಸಿದ್ಧರಾಮನು ತನ್ನ ವಚನಗಳಲ್ಲಿ 'ತಿಂಗಳಧರ', 'ತಿಂಗಳಸೂಡ' ಎಂದು ಕರೆದಿದ್ದರೆ ಭೀಮಕವಿಯು ತನ್ನ 'ಬಸವಪುರಾಣ'ದಲ್ಲಿ 'ತಿಂಗಳ ಸೂಡಿದವ' ಎನ್ನುತ್ತಾನೆ.

ತಿಂಗಳು ಎಂದರೆ ಚಂದ್ರನ ಬೆಳಕು. "ತಂಗಾಳಿಯುಂ ತಿಂಗಳುಂ ಬನಮುಂ ಬೆಂಬಲಮಾಗಿ ತೀರ್ಚವೆ ಗಡಂ ಕೊಂಡುಗ್ಗಿಯಂ ಸುಗ್ಗಿಯೊಳ್" ಎಂಬ ಮಾತು ರನ್ನನ 'ಅಜಿತಪುರಾಣ'ದ್ದು. "ತಿಂಗಳ ಸೊಂಪು ಪುಷ್ಪಬಾಣದ ಪೊದೆ" ಎಂಬುದು ಮಧುರಕವಿಯ 'ಧರ್ಮನಾಥಪುರಾಣ'ದ್ದು.ಚಂದ್ರನ ಬೆಳಕು ಬೆಳ್ಳಗಿರುವುದರಿಂದಾಗಿ ಅದು ಬೆಳುದಿಂಗಳು, ಬೆಳ್ದಿಂಗಳು ಎಂದೂ ಕರೆಯುವುದು ವಾಡಿಕೆ. "ಬೆಳ್ದಿಂಗಳೆಂಬೊಂದು ಪಂಬಲ ಬಂಬಲ್ಗೆಡೆಯಾಗೆ" ಎಂಬುದು 'ಪಂಪಭಾರತ'ದ ವರ್ಣನೆ. ನೇಮಿಚಂದ್ರನ 'ಲೀಲಾವತಿ'ಯಲ್ಲಿ "ಬೆಳ್ದಿಂಗಳ ಬೆಳತಿಗೆಯಂ ಪಂಸೆ ಪಾಲ್ಗೆತ್ತು ಸಾರ್ದಪ್ಪುದೋ" ಎಂಬ ವರ್ಣನೆಯಿದೆ. "ಸುಳಿದು ಬೀಸುವ ಗಾಳಿ ಉರಿಯಾಯಿತ್ತವ್ವ, ಬೆಳುದಿಂಗಳು ಬಿಸಿಲಾಯಿತ್ತು ಕೆಳದಿ" ಎಂಬ ಮಾತು ಚೆನ್ನಮಲ್ಲಿಕಾರ್ಜುನನ ವಿರಹದಲ್ಲಿ ಬೆಂದ ಮಹಾದೇವಿಯಕ್ಕನ ಚೀತ್ಕಾರ. "ಮೇಘವೇ ಜಡೆ ಬೆಳುದಿಂಗಳೇ ವಿಭೂತಿ ಪರ್ವತಂಗಳೇ ರುದ್ರಾಕ್ಷಿ"" ಎಂಬ ಅದ್ಭುತ ಚಿತ್ರ ಆದಯ್ಯನ ವಚನವೊಂದರಲ್ಲಿದೆ. 'ಬೆಳುದಿಂಗಳ ನೋಡಾ' ಎಂಬ ಬೇಂದ್ರೆಯವರ ಒಂದು ಪ್ರಸಿದ್ಧ ಕವನವಿದೆ. 'ಬೆಳ್ದಿಂಗಪ್ಪನ ಪೂಜೆ' ಎಂಬ ಜಾನಪದ ಗೀತೆ ಪ್ರಸಿದ್ಧವಾಗಿದೆ. ಚಕೋರವನ್ನು 'ಬೆಳದಿಂಗಳ ಹಕ್ಕಿ' ಎನ್ನುವುದುಂಟು. 'ಬೆಳುದುಂಗಳೂಟ' ಹಿಂದೆಲ್ಲ ಜನಪ್ರಿಯವಾಗಿತ್ತು.

* * *

**ತಿಂಗಳು2:** ಈಗ ತಿಂಗಳು ಶಬ್ದದ ಮತ್ತೊಂದು ಅರ್ಥದ ಬಗ್ಗೆ ಗಮನ ಹರಿಸೋಣ. ಚಂದ್ರನು ಕಾಣಿಸಿಕೊಂಡು ಬೆಳೆಯುತ್ತ ಪೂರ್ಣಗೊಂಡು ಮತ್ತೆ ಇಳಿಯುತ್ತ ಕಣ್ಮರೆಯಾಗುವ ಅವಧಿಯನ್ನು ಕನ್ನಡದಲ್ಲಿ ತಿಂಗಳು ಎನ್ನುತ್ತೇವೆ. ಇದು ರೂಢಿಗೆ ಬಂದಿರುವುದು ಪ್ರಾಯಶಃ ನಾವು ಚಾಂದ್ರಮಾನವನ್ನು ಅನುಸರಿಸಿ ಕಾಲಗಣನೆ ಮಾಡುವುದರಿಂದಾಗಿ. ಕ್ರಿಶ 800 ರ ಶಾಸನವೊಂದರಲ್ಲಿಯೇ ಈ ಅರ್ಥದಲ್ಲಿ ಈ ಶಬ್ದವನ್ನು ಬಳಸಲಾಗಿದೆ: "ಉಗ್ರಸೇನ ಗುರುವಡಿಗಳ್ ಒನ್ದು ತಿಙ್ಗಳ್ ಸನ್ಯಾಸನಂ ನೋನ್ತು". ಹಾಗೆಯೇ 'ವಡ್ಡಾರಾಧನೆ'ಯಲ್ಲಿ "ಇಂತು ವರ್ಷಾಕಾಲದ ನಾಲ್ಕು ತಿಂಗಳೊಳು ಮರ್ದನೂಡಿ" ಎಂಬ ಪ್ರಯೋಗವಿದೆ. "ಒಂದು ತಿಂಗಳು ಪಲವು ಮನ್ನಣೆಯಿಂದ ಮನ್ನಿಸಿ ತನ್ನ ಸೇನಾವ್ರಂದವನು" ಎಂಬುದು ಕುಮಾರವ್ಯಾಸನ ಮಾತು. "ಹಿಂದಿರುಗಿ ಬಂದೆನ್ನನೊಂದೆ ಮಾತಿನಲಿ 'ತಿಂಗಳಾಯಿತೆ?'ಎಂದಳೆನ್ನ ಹೊಸಹುಡುಗಿ" ಎಂಬ ಸಾಲುಗಳು ಕೆಎಸ್‌ನ ಅವರ 'ತಿಂಗಳಾಯಿತೆ' ಕವನದ್ದು. ತಿಂಗಳು ಎಂಬುದನ್ನು ಮೂವತ್ತು ದಿವಸಗಳ ಅವಧಿ ಎಂಬುದರ ಜೊತೆಗೆ ಚೈತ್ರ ವೈಶಾಖ ಮುಂತಾದ ನಮ್ಮ ಮಾಸಗಳನ್ನು ಸೂಚಿಸುವಂತೆಯೇ ಜನವರಿ ಫೆಬ್ರವರಿ ಮುಂತಾದ ಇಂಗ್ಲಿಷ್ ಮಾಸಗಳನ್ನು ಸೂಚಿಸಲೂ ಬಳಸುತ್ತೇವೆ.

ಈ ಎರಡೂ ಅರ್ಥಗಳ ಶ್ಲೇಷೆಯನ್ನು ಅನೇಕ ಕಡೆಗಳಲ್ಲಿ ಕಾಣಬಹುದು. ಬ್ರಹ್ಮಶಿವನ 'ಸಮಯ ಪರೀಕ್ಷೆ'ಯಲ್ಲಿ ಇಂತಹ ಪ್ರಯೋಗವಿದೆ. "ತಿಂಗಳ್ವರಂ ಅಮೃತಮಂ ಆ ತಿಂಗಳ್ ಸುರಿದಪುದೆ ಬಯಸಿ ನೋಡುವರೆಲ್ಲಂ ತಿಂಗಳೊಳ್ ಒಂದು ದಿನಂ ಚೌತಿಯೊಳೆ ವಿಷಮನುಗುಳ್ವುದೆ ನೋಡಲ್." ಹಾಗೆಯೇ "ತಿಂಗಳ ಸಿರಿಯಿದು ಮುನ್ನಮೆ ತಿಂಗಳ ಸಿರಿಯಲ್ತು ಪಕ್ಷಮೆಂಬಾ ಪಕ್ಷಂ ಸಂಗತಿವಡೆಯದು ಪಗಲೀ ಭಂಗಿ ದಲದಱಿಂದವಾರೋ ನೆರೆಸಿರಿಯೆಱೆಯರ್" ಎಂಬುದು 'ಚಂದ್ರಪ್ರಭ ಪುರಾಣದ ಅಗ್ಗಳನ ಚಮತ್ಕಾರದ ಮಾತು. ಬೇಂದ್ರೆಯವರಂತೂ ಇಂತಹುದಕ್ಕೆ ಖ್ಯಾತರಾದವರು. ಅವರ 'ಅನಂತ ಪ್ರಣಯ' ಎಂಬ ಗೀತೆಯಲ್ಲಿ "ಭೂರಂಗಕೆ ಅಭಿಸಾರಕೆ ಕರೆಯುತ ತಿಂಗಳು ತಿಂಗಳು ನವೆಯುತಿದೆ" ಎಂಬ ಸಾಲು ಇಂತಹ ಶ್ಲೇಷೆಯುಳ್ಳದ್ದು.

ನಿರಂತರತೆಯನ್ನು ಸೂಚಿಸಲು ಈ ಶಬ್ದದ ದ್ವಿರುಕ್ತಿಯನ್ನು ಬಳಸುವುದು ರೂಢಿ: "ಸ್ಥಳದ ಹೆಜ್ಜುಂಕದಲ್ಲಿ ತಿಂಗಳ್ ತಿಂಗಳ್‌ಗೆ ಕೊಟ್ಟ ಗದ್ಯಾಣ 1" ಎಂಬ ಮಾತು ಹನ್ನೆರಡನೆಯ ಶತಮಾನದ ಶಾಸನವೊಂದರಲ್ಲಿ ಬಂದಿರುವ ಸಾಲು. ತಿಂಗಳ ಲೇಖೆ ಎಂದರೆ ಚಂದ್ರನ ಕಲೆ: "ತಿಂಗಳ ಲೇಖೆಯಂ ಬಿಡದೆ ಗೂಡಿವಂಗೆ ಮಹೇಶ್ವರಂಗೆ" (ಸೋಮದೇವನ 'ಉದ್ಭಟಕಾವ್ಯ'). 'ತಿಂಗಳುಗಟ್ಟಲೆ' 'ತಿಂಗಳುವಾರು' 'ತಿಂಗಳೊಪ್ಪತ್ತು' ಮುಂತಾದ ಮಾತುಗಳೂ ದಿನನಿತ್ಯದ ಪ್ರಯೋಗದಲ್ಲಿ ಹೇರಳವಾಗಿವೆ.

# 22-11-2017ರಂದು ನಡೆಯಲಿರುವ ಬಿ.ಜಿ. ಕುಸುಮ ಟ್ರಸ್ಟ್ ದತ್ತಿಯಡಿಯಲ್ಲಿ ಸರ್. ಸಿ.ವಿ.ರಾಮನ್ ಸ್ಮಾರಕ ವಿಜ್ಞಾನ ಉಪನ್ಯಾಸ ಹಿನ್ನಲೆಯಲ್ಲಿ ಕಿರುಪರಿಚಯ



ಸರ್.ಸಿ.ವಿ.ರಾಮನ್', ನೋಬೆಲ್ ಪ್ರಶಸ್ತಿಗಳಿಸಿದ, ಪ್ರಪ್ರಥಮ ಭಾರತೀಯ ವಿಜ್ಞಾನಿ.

**ಬಾಲ್ಯ ಹಾಗೂ ವಿದ್ಯಾಭ್ಯಾಸ**

ಚಂದ್ರಶೇಖರ ವೆಂಕಟಾರಾಮನ್, ನವೆಂಬರ್ 7, 1888 ರಲ್ಲಿ ತಮಿಳುನಾಡಿನ ತಿರುಚಿನಾಪಳ್ಳಿ 'ತಿರುವನ್ನೈಕಾವಲ್' ಎಂಬಲ್ಲಿ ಜನಿಸಿದರು. ಅವರತಂದೆ, ಚಂದ್ರಶೇಖರ್ ಕಾಲೇಜಿನಲ್ಲಿ ಭೌತಶಾಸ್ತ್ರ ಪ್ರಾಧ್ಯಾಪಕರಾಗಿದ್ದರು. ತಾಯಿಯವರ ಹೆಸರು, 'ಪಾರ್ವತಿ ಅಮ್ಮಾಳ್'. ಮೇಧಾವಿಯಾಗಿದ್ದ ರಾಮನ್ ವಿದ್ಯಾಭ್ಯಾಸ ಹಾಗೂ ವೃತ್ತಿಜೀವನದಲ್ಲಿ ಮಾಡಿದ ಸಾಧನೆ ಅಪಾರವಾಗಿತ್ತು :

* ತಮ್ಮ 12 ನೆ ವಯಸ್ಸಿನಲ್ಲೇ 'ಮೆಟ್ರಿಕ್ಯುಲೇಶನ್' ಮುಗಿಸಿದರು.
* 'ಮದ್ರಾಸಿನ ಪ್ರೆಸಿಡೆನ್ಸಿ ಕಾಲೇಜಿ'ನಲ್ಲಿ ಬಿ.ಎಸ್ಸಿ(1904) ಪದವಿ,
* ಎಂ.ಎಸ್ಸಿ (1907) ಪದವಿಗಳನ್ನು ಗಳಿಸಿದರು.
* 1907ರಲ್ಲಿ 'ಭಾರತೀಯ ಸಿವಿಲ್ ಸರ್ವಿಸ್ ಪರೀಕ್ಷೆ'ಯಲ್ಲಿ ಉತ್ತೀರ್ಣರಾಗಿ 'ಕಲ್ಕತ್ತೆ'ಯಲ್ಲಿ 'ಡೆಪ್ಯುಟಿ ಅಕೌಂಟೆಂಟ್ ಜನರಲ್' ಆಗಿ ವೃತ್ತಿ-ಜೀವನ ಆರಂಭಿಸಿದರು, ವಿದ್ಯಾರ್ಥಿಯಾಗಿದ್ದಾಗ ವೈಜ್ಞಾನಿಕ ಪ್ರಯೋಗಗಳಲ್ಲಿ ತೋರುತ್ತಿದ್ದ ಆಸಕ್ತಿಯನ್ನು ಅವರು ವೃತ್ತಿನಿರತರಾಗಿದ್ದಾಗಲೂ ಮುಂದುವರಿಸಿದರು.
* 1917ರಲ್ಲಿ 'ಕಲ್ಕತ್ತಾ ವಿಶ್ವವಿದ್ಯಾಲಯದಲ್ಲಿ ಭೌತಶಾಸ್ತ್ರದ ಪ್ರಾಚಾರ್ಯ'ರಾದರು.
* 1924ರಲ್ಲಿ 'ಲಂಡನಿನ ಫೆಲೊಆಫ್‌ರಾಯಲ್ ಸೊಸೈಟಿ'ಗೆ ರಾಮನ್ ಆಯ್ಕೆಯಾದರು.
* ಮಾರ್ಚ್ 16 1928ರಲ್ಲಿ ತಮ್ಮ ಶೋಧನೆ, 'ರಾಮನ್‌ಎಫೆಕ್ಟ್'ನ್ನು 'ಬೆಂಗಳೂರಿ'ನಲ್ಲಿ ಬಹಿರಂಗ ಪಡಿಸಿದ ರಾಮನ್, 1930ರಲ್ಲಿ ಅದಕ್ಕಾಗಿ 'ನೋಬೆಲ್ ಪ್ರಶಸ್ತಿ'ಗಳಿಸಿದರು.

**ಮದುವೆ**

ಡಾ.ರಾಮನ್, 6, ಮೇ, 1907 ರಲ್ಲಿ 'ಲೋಕಸುಂದರಿ ಅಮ್ಮಾಳ್'ಎಂಬ ಹುಡಿಗಿಯೊಂದಿಗೆ ವಿವಾಹವಾದರು. (1892 -1980). 'ರಾಮನ್,' 'ಲೋಕಸುಂದರಿ ಅಮ್ಮಾಳ್' ದಂಪತಿಗಳಿಗೆ ಚಂದ್ರಶೇಖರ್, ಮತ್ತು ರಾಧಾಕೃಷ್ಣನ್, ಎಂಬ ಇಬ್ಬರು ಗಂಡು ಮಕ್ಕಳಿದ್ದಾರೆ.

ರಾಮನ್ ಪರಿಣಾಮ ಎಂಬ ತತ್ತ್ವವು ವಿಜ್ಞಾನಕ್ಕೆ ಸರ್ ಸಿ. ವಿ.ರಾಮನ್‌ರ ಒಂದು ದೊಡ್ಡ ಕೊಡುಗೆಯಾಗಿದೆ. "ಆಕಾಶದ ನೀಲಿ ಬಣ್ಣ ಅವರನ್ನು ಸ್ತಬ್ಧರನ್ನಾಗಿ ಮಾಡಿತ್ತು'. ಅದು ಹೇಗೆ ಸಾಧ್ಯ ? ಎಂಬ ಪ್ರಶ್ನೆ ರಾಮನ್‌ರನ್ನು ಮೊದಲಿನಿಂದಲೂ ಕಾಡುತ್ತಿತ್ತು. ಅದಕ್ಕೆ ಉತ್ತರ ಕಂಡು ಹಿಡಿಯಲು ಪ್ರಯೋಗ ಮಾಡುತ್ತ ಅವರು ಬಹಳ ಸಮಯವನ್ನು ವ್ಯಯಿಸಿದರು. ಸಮುದ್ರದ ಮೇಲೆ ವಿದೇಶ ಪ್ರಯಾಣದಲ್ಲಿದ್ದಾಗ ಕಡಲಿನ ನೀಲಿ ಬಣ್ಣದ ಕಾರಣವನ್ನು ಅರಿಯಲು ಪ್ರಯೋಗ ಮಾಡುತ್ತ ಹಡಗಿನ ತುಂಬ ಅಲೆದಾಡುತ್ತಿದ್ದರು. ಆಕಾಶದ ನೀಲಿ ಬಣ್ಣ ರಾಮನ್‌ರ ಕುತೂಹಲ ಕೆರಳಿಸಿ ಪ್ರಯೋಗಕ್ಕೆ ತೊಡಗಿಸಿತು. ಹಾಗೇ ಬಗೆಬಗೆಯ ಹೂಗಳ ಬಣ್ಣದಿಂದಲೂ ಅವರು ಆಶ್ಚರ್ಯಚಕಿತರಾಗುತ್ತಿದ್ದರು. ವಾತಾವರಣದಲ್ಲಿಯ ಧೂಳಿನ ಕಣಗಳು ಬೆಳಕನ್ನು ಭಾಗಶಃ ಚದುರಿಸುವವು. ಹೀಗೆ ಬೆಳಕು ಚದುರಿದಾಗ, ಅದರಎಲ್ಲ ಬಣ್ಣಗಳೂ ಚದುರುವುವು. ಹೆಚ್ಚು ಚದುರದ ಕೆಂಪು ಬೆಳಕು ದಿಗಂತದ ಸಮೀಪ ಸೂರ್ಯಕಾಣುವ ಪ್ರದೇಶದಲ್ಲಿ ಪ್ರಜ್ವಲಿಸುವುದು. ಉಳಿದದ್ದು ಆಕಾಶಕ್ಕೆ ನೀಲಿ ಬಣ್ಣವನ್ನು ನೀಡುವುದು. ಬೆಳಕು ಚದುರುವಾಗ ಶಕ್ತಿಯ ಸ್ವೀಕಾರ ಅಥವಾದಾನ ಬೆಳಕಿನ ತರಂಗಾಂತರವನ್ನು ನಿರ್ದಿಷ್ಟವಾಗಿ ಬದಲಾಯಿಸುವ ಸಾಧ್ಯತೆ ಲಕ್ಷ್ಯದಲ್ಲೊಂದು ಮಾತ್ರ. ಎಂದ-ರೆಒಂದು ಲಕ್ಷ ಬೆಳಕಿನ ಕಣಗಳು ಚದುರಿದಾಗ ಒಂದು ಮಾತ್ರ ರಾಮನ್ ಪರಿಣಾಮಕ್ಕೆ ಒಳಗಾಗುವುದು, ಎನ್ನುವ ವಿಚಾರ ಬೆಳಕಿಗೆ ಬಂತು. ಇದನ್ನೇ "ರಾಮನ್ ಪರಿಣಾಮ " ಎಂದು ಕರೆಯಲಾಗುತ್ತದೆ. ಇದು ಅನ್ವಯಿಕ ಉಪಯುಕ್ತತೆಯುಳ್ಳ ತತ್ವ.

**ಟಾಟ ಇನ್ಸ್ಟಿಟ್ಯೂಟ್‌ನ ನಿರ್ದೇಶಕರಾಗಿ**

1934ರಲ್ಲಿ 'ಬೆಂಗಳೂರಿನ ಇಂಡಿಯನ್ ಇನ್ಸ್ಟಿಟ್ಯುಟ್‌ಆಫ್ ಸೈನ್ಸ್ ನ ನಿರ್ದೇಶಕ'ರಾಗಿ ಅಧಿಕಾರ ವಹಿಸಿಕೊಂಡ 'ಡಾ.ರಾಮನ್', ತದನಂತರ 1943ರಲ್ಲಿ 'ರಾಮನ್ ಸಂಶೋಧನಾಕೇಂದ್ರ'ವನ್ನು ಬೆಂಗಳೂರಿನಲ್ಲಿ ಸ್ಥಾಪಿಸಿದರು. ಪ್ರೊ. ರಾಮನ್ ಬೆಂಗಳೂರನ್ನು ತಮ್ಮ ಕಾರ್ಯಕ್ಷೇತ್ರವಾಗಿ ಮಾಡಿಕೊಂಡು "ರಾಮನ್ ರೀಸರ್ಚ್‌ಇನ್‌ಸ್ಟಿಟ್ಯೂಟ್" ಎಂಬ ವಿಜ್ಞಾನ ಸಂಶೋಧನಾ ಸಂಸ್ಥೆಯನ್ನು ಅವರ ಜೀವಿತ ಕಾಲದಲ್ಲೇ ಸ್ಥಾಪಿಸಿ ಬಹಳಷ್ಟು ಸಂಶೋಧನೆಗಳನ್ನು ಮಾಡಿದರು. ಭಾವಿ ಸಂಶೋಧಕರಿಗೆ ಬಿಟ್ಟುಹೋಗಿರುವ ಈ ಸಂಸ್ಥೆ ವಿಶೇಷವಾಗಿ ಭೌತಶಾಸ್ತ್ರದ ಅತ್ಯಂತ ಪ್ರಮುಖ ಸಂಶೋಧನ ಸಂಸ್ಥೆಯಾಗಿದೆ.

**ಗೌರವ, ಪ್ರಶಸ್ತಿಗಳು**

* 'ಫೆಲೋಆಫ್ ರಾಯಲ್ ಸೊಸೈಟಿ ಸದಸ್ಯತ್ವ' (1924)
* 'ನೈಟ್ ಹುಡ್ ಪ್ರಶಸ್ತಿ' (1929)
* 'ನೋಬೆಲ್ ಪ್ರಶಸ್ತಿ (1930)
* 'ಮೈಸೂರು ಮಹಾರಾಜ' ರಿಂದ, 'ರಾಜ ಸಭಾ ಭೂಷಣಗೌರವ' (1935)
* 'ಭಾರತರತ್ನ ಪ್ರಶಸ್ತಿ (1954)

**ಮರಣ**

ನವೆಂಬರ್ 21 1970

## ಶಾ ಬಾಲೂರಾವ್



ಶ್ರೀಮತಿ ಕಮಲಿನಿ ಬಾಲೂರಾವ್‌ಅವರು ಬಿ.ಎಂ.ಶ್ರೀ. ಪ್ರತಿಷ್ಠಾನದಲ್ಲಿ ಸ್ಥಾಪಿಸಿರುವ ಎರಡು ಪ್ರಶಸ್ತಿಗಳು 'ಶಾ ಬಾಲೂರಾವ್ ಯುವ ಬರಹಗಾರ ಪ್ರಶಸ್ತಿ' ಮತ್ತು'ಶಾ ಬಾಲೂರಾವ್ ಅನುವಾದ ಪ್ರಶಸ್ತಿ'. ದಿವಂಗತ ಶ್ರೀ ಶಾ. ಬಾಲೂರಾವ್‌ಅವರು ಪ್ರಖ್ಯಾತ ಸಾಹಿತಿಗಳಾಗಿದ್ದವರು.ಇಂಗ್ಲಿಷ್ ಮತ್ತುಕನ್ನಡ ಭಾಷೆಗಳೆರಡರಲ್ಲಿಯೂ ಮೌಲಿಕವಾದ ಬರವಣಿಗೆಯನ್ನು ಮಾಡಿದವರು.

ಸ್ವತಂತ್ರವಾಗಿ ಕಥೆಗಳನ್ನೂ ಬರೆದದ್ದಲ್ಲದೆ ಅನುವಾದವನ್ನೂ ಮಾಡಿದವರು. ಬಂಗಾಳಿ ಮತ್ತು ರಷ್ಯನ್ ಭಾಷೆಗಳಿಂದ ನೇರವಾಗಿ ಕಥೆಗಳನ್ನು, ಕವಿತೆಗಳನ್ನು ಅನುವಾದ ಮಾಡಿರುವುದು ಶಾ. ಬಾಲೂರಾವ್‌ಅವರ ಹೆಗ್ಗಳಿಕೆ.

ಪ್ರತಿಷ್ಠಾನವು ಓಲೆಗರಿಗಳ ಮತ್ತು ಕಾಗದ ಹಸ್ತಪ್ರತಿಗಳ ಸಂರಕ್ಷಣೆ ಮತ್ತು ದಾಖಲೀಕರಣದ ಕಾರ್ಯವನ್ನು ನಿರ್ವಹಿಸುತ್ತಿದೆ. ಆಸಕ್ತರು ಹಸ್ತಪ್ರತಿ ವಿಭಾಗವನ್ನು ಸಂಪರ್ಕಿಸಬೇಕೆಂದು ಕೋರುತ್ತೇವೆ.

## ಬಿ.ಎಂ.ಶ್ರೀ ಪ್ರತಿಷ್ಠಾನದ ಕಚೇರಿ ಭಾನುವಾರಗಳಂದು ತೆರೆದಿರುತ್ತದೆ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಕಚೇರಿ ಹಾಗೂ ಇತರ ಸೇವೆಗಳು ಭಾನುವಾರದಂದು ಸಾರ್ವಜನಿಕರಿಗೆ, ಸದಸ್ಯರಿಗೆ ಹಾಗೂ ಸಾಹಿತ್ಯಾಸಕ್ತರಿಗೆ ಲಭ್ಯ ಮಾಡಿಕೊಡುವ ಉದ್ದೇಶದಿಂದ ವಾರದ ರಜಾ ದಿನವನ್ನು ಬದಲಿಸಲಾಗಿದೆ.ಇನ್ನು ಮುಂದೆ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಕಚೇರಿ ಹಾಗೂ ಇತರ ಸೇವೆಗಳು ಪೂರ್ಣಪ್ರಮಾಣವಾಗಿ ಭಾನುವಾರ ಬೆಳಿಗ್ಗೆ 10.00 ಯಿಂದ ಸಂಜೆ 5.00 ವರೆಗೆ ಲಭ್ಯವಿರುತ್ತದೆ. ಇನ್ನು ಮುಂದೆ ಪ್ರತಿ ಮಂಗಳವಾರ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಕಚೇರಿಗೆ ವಾರದ ರಜೆಯಿರುತ್ತದೆ.


HONGANASU KANNADA MONTHLY
RNI No. KAR/KAN/2015/64049
REGISTERED
Post office Registration No.RNP/KA/BGS/2229/2015-2017
Office of Posting: Bangalore PSO, Bangalore 560026
Price :Annual Subscription Rs. 20/-
Date of publishing and Posting : 30-10-2017


## ೨೦೧೭ ಅಕ್ಟೋಬರ್ ತಿಂಗಳಿನಲ್ಲಿ ಹಸ್ತಪ್ರತಿ ವಿಭಾಗದಲ್ಲಿ ಕೈಗೊಂಡ ಕಾರ್ಯಗಳ ವರದಿ

ಬಿ.ಎಂ.ಶ್ರೀ. ಪ್ರತಿಷ್ಠಾನದ ಹಸ್ತಪ್ರತಿ ವಿಭಾಗದಲ್ಲಿ ವಿವಿಧ ಹಂತದ ಸಂರಕ್ಷಣಾಕಾರ್ಯವು ನಡೆಯುತ್ತಿದೆ. ೨೦೧೭ರ ಅಕ್ಟೋಬರ್ ತಿಂಗಳಿನಲ್ಲಿ ೨ಗ್ರಂಥಗಳ ಶುಷ್ಕ ಶುದ್ಧೀಕರಣ, ೨ ಮಸಿ+ತೈಲ, ೬ ಗ್ರಂಥಪತ್ರಗಳ ಮರುಜೋಡಣೆ ಕಾರ್ಯ, ೪ ಗ್ರಂಥಗಳಿಗೆ ಅಟ್ಟೆ ಕಟ್ಟಿದ ಕಾರ್ಯ, ೧೭ ಗ್ರಂಥಗಳಿಗೆ ಬಟ್ಟೆ ಸುತ್ತುವ ಕಾರ್ಯ, ಮತ್ತು ೧೮ ಗ್ರಂಥಗಳಿಗೆ ಸೂಚಿಯನ್ನು ಮಾಡಲಾಗಿದೆ.

ಡಾ|| ಕೆ.ಎನ್. ನರಸಿಂಹಮೂರ್ತಿ ಶರ್ಮಾ ಭಾರತೀಯ ಅಂಚೆ ಇಲಾಖೆಯ ಪೋಸ್ಟ್ ಮಾಸ್ಟರ್ ಇವರು ಸಂರಕ್ಷಣೆಗಾಗಿ ನೀಡಿದ್ದ ೧೬ ತಾಳೆಗರಿ ಗ್ರಂಥಗಳನ್ನು ಸಂರಕ್ಷಣಾ ವಿಧಾನದಿಂದ ಗ್ರಂಥಗಳನ್ನು ಸಂರಕ್ಷಿಸಿ, ದಿನಾಂಕ–೧೫–೧೦–೨೦೧೭ ರಂದು ಗ್ರಂಥಗಳನ್ನು ಅವರಿಗೆ ಹಿಂತಿರುಗಿಸಲಾಯಿತು.



ಬಿಎಂ.ಶ್ರೀ ಪ್ರತಿಷ್ಠಾನದಲ್ಲಿ ನಡೆದ ಆಯುಧ ಪೂಜಾ ಸಮಾರಂಭದಲ್ಲಿ ಸಂಭ್ರಮಿಸುತ್ತಿರುವ ಆಡಳಿತ ಮಂಡಲಿ ಹಾಗೂ ಸಿಬ್ಬಂದಿ ವರ್ಗ.


**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath


**ಅಚ್ಚಾದ ಪುಸ್ತಕ**

ತೆರೆದ–ಅಂಚೆ

ಶ್ರೀಮತಿ/ಶ್ರೀ.................................................................................

.....................................................................................................

.....................................................................................................


ವಿಳಾಸ
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭